# ಭಾಷೆಯ ಬೋಧನೆಯ ಸಾಧನಗಳು

## TOOLS IN LANGUAGE TEACHING

## Language development through story-telling

### ಕಥೆ-ಹೇಳುವ ಮೂಲಕ ಭಾಷೆಯ ಅಭಿವೃದ್ಧಿ

- **ಗೀತಾ ರಾಮಾನುಜಂ**

ಒಂದು ಅನುಭವವನ್ನೋ, ದಂತಕಥೆಯನ್ನೋ ಅಥವಾ ಸುದ್ದಿ-ಸಮಾಚಾರವನ್ನೋ ಹೇಳುವ ಪ್ರತಿಯೊಬ್ಬ ವ್ಯಕ್ತಿಯೂ ಸಹ ಕಥೆಗಾರನೇ ಆಗಿರುತ್ತಾನೆ. ದೂರದರ್ಶನ, ರೇಡಿಯೋ ಅಥವಾ ಕುಟುಂಬದ ಸದಸ್ಯರ ಮಾತುಗಳನ್ನು ಆಲಿಸುವಾಗ ಅದೇ ಕಥೆಗಾರ ಒಬ್ಬ ಶ್ರೋತೃವೂ ಆಗಿರುತ್ತಾನೆ. ಜಗತ್ತಿನ ಎಲ್ಲಾ ಸಂವಹನವು ಕಥೆಗಳ ಸುತ್ತ ಸುತ್ತುತ್ತದೆ ಮತ್ತು ವಿಕಸನಗೊಳ್ಳುತ್ತದೆ. ಬುಲೆಟಿನ್ ಬೋರ್ಡ್ ಗಳಿಂದ ಹಿಡಿದು, ಬಸ್-ಸ್ಟ್ಯಾಂಡ್ ಗಳು, ರೈಲು ನಿಲ್ದಾಣಗಳು, ನಾಟಕ ಹಾಗೂ ಚಿತ್ರಮಂದಿರಗಳು, ಮನೆಗಳು, ಶಾಲೆಗಳು, ಕಾಲೇಜುಗಳು, ಪಾದಚಾರಿ ಮಾರ್ಗಗಳು, ರಸ್ತೆಗಳು, ಜಾಹೀರಾತುಗಳು, ಕುಟುಂಬಗಳು, ಶಾಲೆಗಳು, ಕೆಲಸದ ಸ್ಥಳಗಳು ಮತ್ತು ಬಾಹ್ಯಾಕಾಶದವರೆಗೆ ಎಲ್ಲೆಲ್ಲಿಯೂ ಕಥೆಗಳಿವೆ. ನಾವು ನಮ್ಮ ಅನುಭವಗಳನ್ನು ಮತ್ತು ನೆನಪುಗಳನ್ನು ಕುಟುಂಬದ ಸದಸ್ಯರು ಮತ್ತು ಸ್ನೇಹಿತರೊಂದಿಗೆ ಹಂಚಿಕೊಂಡಾಗ, ಅವುಗಳು ಕಥೆಗಳಿಂದ ತುಂಬಿರುತ್ತವೆ.

ಆದ್ದರಿಂದ, ಸ್ವಾಭಾವಿಕವಾಗಿ ಪರಸ್ಪರ ಸಂವಹನದ ಅಗತ್ಯತೆಯು ಸ್ಪಷ್ಟವಾಗುತ್ತದೆ.

ಸಂವಹನದಲ್ಲಿ ಭಾಷೆ ಪ್ರಮುಖ ಪಾತ್ರವನ್ನು ವಹಿಸುತ್ತದೆ. ಕಥೆ ಹೇಳುವ ಭಾಷೆಯು, ಮೌಖಿಕ ಸಂಪ್ರದಾಯದ ಅಡಿಪಾಯವಾದ, ಆಲಿಸುವ, ಸ್ಮರಣೆಯ ಮತ್ತು ಮತ್ತೆ-ಮತ್ತೆ ಹೇಳುವ ಕೌಶಲ್ಯಗಳನ್ನು ಒಳಗೊಂಡಿರುತ್ತದೆ. ಭಾಷಾ-ಬೆಳವಣಿಗೆಯ ನಾಲ್ಕು ಮೂಲ ಸ್ತಂಭಗಳಾದ ಆಲಿಸುವಿಕೆ ಮತ್ತು ಮಾತನಾಡುವಿಕೆ, ಓದುವಿಕೆ ಮತ್ತು ಬರೆಯುವಿಕೆಯು ಕಥೆಯೆಂಬ ನಿಧಿಪೆಟ್ಟಿಗೆಯಲ್ಲಿ ಅಡಕವಾಗಿವೆ.

ಕಥೆಗಳು ಚಿಕ್ಕ ವಯಸ್ಸಿನಿಂದಲೇ ಒಂದು ಮಗುವಿನಲ್ಲಿ ಕಲ್ಪನೆಯನ್ನು ಹುಟ್ಟುಹಾಕುವ ಬೆರಗಿನ ಪ್ರಜ್ಞೆಯನ್ನು ಸೃಜಿಸುತ್ತವೆ. ಪ್ರತಿಯೊಂದು ಸಂಸ್ಕೃತಿಯಲ್ಲಿನ ಜನಪದ ಕಥೆಗಳ ಗುಪ್ತನಿಧಿ ಭಂಡಾರವೇ ನಮ್ಮ ಹಿತ್ತಲಿನಲ್ಲಿ ಗುಪ್ತವಾಗಿ ನೆಲೆಸಿದೆ. ಈ ನಿಧಿಯನ್ನು ಶೋಧಿಸಿ

ಅದನ್ನು ನಮ್ಮ ಮಕ್ಕಳ ಮನಸ್ಸುಗಳಲ್ಲಿ ಬಿತ್ತುವುದು ಒಂದು ಸಮುದಾಯವಾಗಿ ನಮ್ಮ ಕರ್ತವ್ಯವಾಗಿದೆ. ಹೀಗೆ ಮಾಡುವುದರಿಂದ ಮಕ್ಕಳು ಕಥೆಯ ಪಾತ್ರಗಳನ್ನು ಆಲಿಸಿ, ಅನುಭವಿಸಲು ಮತ್ತು ಕಥೆಯನ್ನು ಹೇಳುವವರ ದನಿಗಳನ್ನು ಕೇಳಲು ಅವರಿಗೆ ನೆರವಾಗುತ್ತದೆ.

## ಧ್ವನಿಗಳ ವಿಕಾಸ ಮತ್ತು ಭಾಷೆಯ ಅಭಿವೃದ್ಧಿ

ಶಬ್ದಗಳು ಎಂದರೆ ಏನು? ಪರಮಾಣು ವಿಜ್ಞಾನ ಮತ್ತು ಐನ್ ಸ್ಟೈನ್ ಸಿದ್ಧಾಂತಗಳು ಪರಮಾಣುವಿನ ಮಟ್ಟದಲ್ಲಿ ಎಲ್ಲಾ ವಸ್ತುವು ಒಂದೇ ಆಗಿರುತ್ತದೆಂದು ಪ್ರತಿಪಾದಿಸಿವೆ. ಏಕೆಂದರೆ ಶಕ್ತಿಯು ವಿವಿಧ ಬಿಂದುಗಳಲ್ಲಿ ವಿಭಿನ್ನ ಆವರ್ತನಗಳ ಕಂಪನವನ್ನು ಉಂಟುಮಾಡುವುದರಿಂದ ವಸ್ತುಗಳು ಕಣ್ಣಿಗೆ ವಿಭಿನ್ನವಾಗಿ ಗೋಚರಿಸುತ್ತವೆ.

ಕಂಪನವು ಶಬ್ದವನ್ನು ಸೃಷ್ಟಿಸುತ್ತದೆ. ಪ್ರಾಚೀನ ಋಷಿಮುನಿಗಳು ಆದಿಮ ಕಂಪನಗಳನ್ನು ಗ್ರಹಿಸಿ ಅವುಗಳನ್ನು *ಶ್ರುತಿ* ಅಥವಾ ಕೇಳಬಲ್ಲವಂತವು ಎಂದು ಕರೆದರು. ವೇದಗಳ ಮೌಖಿಕ ಪಠಣ ಮತ್ತು ಸಂಪ್ರದಾಯವನ್ನು ಯಾವುದೇ ಲಿಖಿತ ದಾಖಲೆಗಳಿಲ್ಲದೆ ಒಂದು ಪೀಳಿಗೆಯಿಂದ ಇನ್ನೊಂದು ಪೀಳಿಗೆಗೆ ರವಾನಿಸಲಾಗಿದೆ. ಅವು ಕರ್ತೃತ್ವ ಅಥವಾ ಹಕ್ಕುಸ್ವಾಮ್ಯ ಎಂಬ ನಿರ್ಬಂಧಗಳನ್ನು ಹೊಂದಿಲ್ಲ. ಆದರೂ ಗುರು-ಶಿಷ್ಯ ಸಂಪ್ರದಾಯದಲ್ಲಿ ಕಿವಿಯ ಮೂಲಕ ಕಲಿಯುವ ಈ ಪ್ರಾಚೀನ ವಿಧಾನದ ಮೂಲಕ ಇಂದಿಗೂ ಪರಂಪರೆಯು ಮುಂದುವರೆಯುತ್ತಿದೆ.

ಅವುಗಳನ್ನು ಏಕೆ ಬರೆದಿಟ್ಟಿಲ್ಲ? ಕೆಲವು ಶಬ್ದಗಳನ್ನು ಭಾಷಾ-ಧ್ವನಿಶಾಸ್ತ್ರೀಯವಾಗಿ (phonetically) ನಿಖರವಾಗಿ ಪುನರುತ್ಪಾದಿಸಲು ಆಗುವುದಿಲ್ಲ ಎಂದು ಕೆಲವರು ಹೇಳುತ್ತಾರೆ. ಅವು ಎರಡು ಉಚ್ಚಾರಾಂಶಗಳ (syllables) ನಡುವೆ ಬರುತ್ತವೆ ಮತ್ತು ವೇದಗಳಲ್ಲಿ ಇಂತಹ ಅನೇಕ ಉಚ್ಚಾರಾಂಶಗಳಿವೆ. ನಮ್ಮ ಭಾವನಾತ್ಮಕ ಪ್ರತಿಕ್ರಿಯೆ ಮತ್ತು ಪ್ರಕೃತಿಯ ಕ್ರಮಬದ್ಧತೆಯನ್ನು ನಿಯಂತ್ರಿಸುವ ವಿಶ್ವಶಕ್ತಿ ಸಹ ಸ್ವರದಲ್ಲಿನ ಏರಿಳಿತಗಳೊಂದಿಗೆ, ವ್ಯತ್ಯಾಸಗಳೊಂದಿಗೆ ಬದಲಾಗುತ್ತವೆ.

ಧ್ವನಿಯಲ್ಲಿನ ಏರಿಳಿತ ಹೇಗೆ ಪ್ರತಿಕೂಲ ಪರಿಣಾಮಗಳನ್ನು ಉಂಟುಮಾಡುತ್ತದೆ ಎಂಬುದನ್ನು ವೇದಗಳ *ತೈತ್ತರೀಯ ಸಂಹಿತೆ*ಯಲ್ಲಿ ಒಂದು ಸಣ್ಣ ಕಥೆಯ ಮೂಲಕ ಹೇಳಲಾಗಿದೆ. ತ್ವಷ್ಟ ಎಂಬ ಹೆಸರಿನ ದಿವ್ಯಲೋಕದ ಕುಶಲಕರ್ಮಿಯು ಇಂದ್ರನನ್ನು ನಾಶಮಾಡುವ ಸಾಮರ್ಥ್ಯವಿರುವ ಮಗನನ್ನು ಸೃಷ್ಟಿಸಬಹುದಾದ *ಮಂತ್ರಜಪ*ವನ್ನು ಕಲಿತನು. ಮಂತ್ರವನ್ನು ಪಠಿಸುವಾಗ, ಅವನು ಪದಗಳ ಶಬ್ದಗಳ ಧ್ವನಿ ಮತ್ತು ಉಚ್ಚಾರಣೆಯ

ಏರಿಳಿತದಲ್ಲಿ ತಪ್ಪು ಮಾಡಿದ. ಇದು ಅವನ ಉದ್ದೇಶಕ್ಕೆ ವ್ಯತಿರಿಕ್ತವಾದ ಮಗನ ಸೃಷ್ಟಿಗೆ ಕಾರಣವಾಯಿತು. ಇಂದ್ರನನ್ನು ನಾಶಮಾಡುವ ಮಗನನ್ನು ಕೇಳುವ ಬದಲು ಇಂದ್ರನಿಂದ ನಾಶವಾಗುವ ಮಗನನ್ನು ಕೇಳಿಬಿಟ್ಟನು. ಕೊನೆಗೆ ಅಂತಹ ಮಗನೇ ಹುಟ್ಟಿದನು ಎಂಬಂತೆ ಕಥೆಯು ಸಾಗುತ್ತದೆ.

ಭಾಷೆ ಎಂಬುದು ಸರಿಯಾದ ಪರಿಣಾಮದೊಂದಿಗೆ ಸರಿಯಾಗಿ ಮಾತನಾಡಿದ ಪದಗಳಾಗಿವೆ.. ಸಂವೇದನೆ, ಭಾವನೆ, ಅಥವಾ ಸಂಗತಿಯ ಉದ್ದೇಶವನ್ನು ನಿರ್ಧರಿಸುವ ಪದಗಳು ಸರಿಯಾದ ಸ್ವರ, ಭಾವನೆ ಮತ್ತು ಉಚ್ಚಾರಣೆಯೊಂದಿಗೆ ಪ್ರಸರಣಗೊಂಡಾಗ ಮಾತ್ರ ಸಂವಹನ ಪರಿಣಾಮಕಾರಿಯಾಗಬಹುದು.

ಸಂಗೀತದಲ್ಲಿ ಚೆನ್ನಾಗಿ ಪಳಗಿದ ವ್ಯಕ್ತಿಯು ಅಪಶ್ರುತಿಯನ್ನು ತಕ್ಷಣವೇ ಗುರುತಿಸುವಂತೆಯೇ, ಭಾಷೆಯನ್ನು ಚೆನ್ನಾಗಿ ಅರಿತಿರುವ ವ್ಯಕ್ತಿಯು ಆಡು-ಭಾಷೆಯಲ್ಲಿನ ತಪ್ಪನ್ನು ಗುರುತಿಸಬಹುದು.

ಜಪಾನಿನ ಟೋಕಿಯೋ ಮಕ್ಕಳ ಗ್ರಂಥಾಲಯದಲ್ಲಿ, ಮುಖ್ಯ ಗ್ರಂಥಪಾಲಕರು ಕಥೆ ಹೇಳುವಿಕೆಯ ಮೂಲಕ ಮಕ್ಕಳಿಗೆ ಜಪಾನೀಸ್ ಭಾಷೆಯನ್ನು, ಇಂದು ಮಾತನಾಡುವ ಹಾಗೆ ಮಾತನಾಡದೇ, ವಿರಾಮವಾಗಿ, ನಿಧಾನವಾಗಿ ಮಾತನಾಡುತ್ತ ಆ ಭಾಷೆಯನ್ನು ಕಲಿಸುತ್ತಾರೆ.

ನೀವು ನಮ್ಮ ರೇಡಿಯೋ ಮತ್ತು ದೂರದರ್ಶನ ಚಾನೆಲ್ ಗಳನ್ನು ಆಲಿಸಿದರೆ, ಎಲ್ಲಾ ಪ್ರಾದೇಶಿಕ ಭಾಷೆಗಳು ಇಂಗ್ಲಿಷ್ ಮಿಶ್ರಣದೊಂದಿಗೆ ಒಂದೇ ರೀತಿಯಲ್ಲಿ ಉಚ್ಚರಿಸಲ್ಪಡುತ್ತಿರುವಂತೆ ಧ್ವನಿಸುತ್ತವೆ. ವಾಸ್ತವದಲ್ಲಿ ಇಂಗ್ಲಿಷ್ ಅನ್ನು ಯಾವ ರೀತಿಯಾಗಿ ಮಾತನಾಡಬೇಕೋ ಹಾಗೆ ಮಾತನಾಡದ ಅಥವಾ ಆಧುನಿಕ ಆಡುಭಾಷೆಯೂ ಅಲ್ಲದ, ಹೊಸ, ಸಂಪೂರ್ಣ ಅರ್ಥಹೀನ ಭಾಷೆಯನ್ನು ನಾವು ಬೆಳೆಸುತ್ತಿದ್ದೇವೆ.

ಚಾಲ್ತಿಯಲ್ಲಿದೆ ಎನ್ನಲಾಗುವ, ಈಗಲೂ ಮಾತನಾಡುತ್ತಿರುವ ಸುಮಾರು 1,652ಕ್ಕೂ ಹೆಚ್ಚು ಮಾತೃಭಾಷೆಗಳ ಭಾಷಾ ಪ್ರಕಾರಗಳ ಹೆಸರುಗಳನ್ನು ದಾಖಲಿಸಲಾಗಿದೆ. ಭಾರತ ಒಂದರಲ್ಲೇ, ಈ ಮಾತಿನ ಪ್ರಭೇದಗಳು ಅಥವಾ ಉಪಭಾಷೆಗಳನ್ನು 105 ಭಾಷೆಗಳ ಅಡಿಯಲ್ಲಿ ಭಾಷಾಶಾಸ್ತ್ರಜ್ಞರು ವರ್ಗೀಕರಿಸಿದ್ದಾರೆ.

### ಬೋಧನೆಗಾಗಿ ಭಾಷೆ

ಭಾಷೆಯು ಎಲ್ಲಾ ಸಂವಹನದ ಆಧಾರವಾಗಿರುವುದರಿಂದ ಶಿಕ್ಷಕರು ಪರಿಣಾಮಕಾರಿಯಾಗಿ ಸಂವಹನ ಮಾಡಬಲ್ಲವರಾಗಿರಬೇಕು. ಮಕ್ಕಳ ಭಾವನಾತ್ಮಕ ಮತ್ತು ಬೌದ್ಧಿಕ ಅಂಶವನ್ನು

ಸಮತೋಲನಗೊಳಿಸುವುದು ಶಿಕ್ಷಕರ ಜವಾಬ್ದಾರಿಯಾಗಿದೆ. ಅವರು ತರಗತಿಯಲ್ಲಿ ಉತ್ತಮವಾಗಿ ಸಂವಹನ ನಡೆಸಿದಾಗ ಮಾತ್ರ ಇದು ಸಾಧ್ಯವಾಗುತ್ತದೆ.

ನಾವು ಒಂದು ದಿನದ ಶಾಲಾ ಅವಧಿಯನ್ನು ವಿವಿಧ ವಿಷಯದ ಅವಧಿಗಳಾಗಿ ವಿಂಗಡಿಸಿದರೂ, ಭಾಷೆಯ ಕೌಶಲ್ಯಗಳನ್ನು ದಿನವಿಡೀ ಬಳಸಲಾಗುತ್ತದೆ. ಆಲಿಸುವಿಕೆ ಮತ್ತು ಓದುವಿಕೆಯು ಸ್ವೀಕರಿಸುವ ಕೌಶಲ್ಯಗಳಾದರೆ, ಮಾತನಾಡುವಿಕೆ ಮತ್ತು ಬರೆಯುವಿಕೆಯು ಹಂಚಿಕೊಳ್ಳುವ ಕೌಶಲ್ಯಗಳಾಗಿವೆ. ಆಲಿಸುವಿಕೆಯೊಂದಿಗೆ ಬೆಸೆದುಕೊಳ್ಳದ ಹೊರತು ಮಾತಿಗೆ ಯಾವುದೇ ಉದ್ದೇಶವಿರುವುದಿಲ್ಲ. ಆಲಿಸುವಿಕೆಗೂ ಆಗಾಗ ವಿರಾಮ ಬೇಕಾಗುತ್ತದೆ. ಇಂಗ್ಲೀಷಿನಲ್ಲಿ 'ಲಿಸನ್' (listen) ಎಂಬ ಪದದೊಳಗೆ 'ಸೈಲೆಂಟ್' (silent) ಎಂಬ ಪದದ ಅಕ್ಷರಗಳೂ ಆಶ್ಚರ್ಯಕರವಾಗಿ ಸೇರಿಕೊಂಡಿವೆ! ಸುಮಾರು 40 ವಿವಿಧ ರೀತಿಯ ಆಲಿಸುವಿಕೆಗಳಿದ್ದು ದೇಹ, ಮನಸ್ಸು ಮತ್ತು ಆತ್ಮಗಳನ್ನು ಏಕಾಗ್ರಗೊಳಿಸಿ ಆಲಿಸುವುದೆಂದರೇನು ಎಂಬುದನ್ನು ಅರ್ಥಮಾಡಿಕೊಳ್ಳಬೇಕು.

ಸಹಬಾಳ್ವೆ ಎಂದರೆ ಪರಸ್ಪರರನ್ನು ಗ್ರಹಿಸುವುದು ಮತ್ತು ಪರಸ್ಪರರ ಭಾವನೆಯನ್ನು ಹಂಚಿಕೊಳ್ಳುವುದು, ವಿಚಾರಗಳನ್ನು ವಿನಿಮಯ ಮಾಡಿಕೊಳ್ಳುವುದು ಎಂದರ್ಥ. ಕಥೆ ಹೇಳುವಿಕೆಯು ಇದಕ್ಕೆ ಅಡಿಪಾಯವನ್ನು ಹಾಕುತ್ತದೆ. ಒಂದು ಕಥೆಯಲ್ಲಿ ಬರಬಹುದಾದ ಪದಗಳಾದ ನದಿ, ಮಂಗ ಅಥವಾ ಚಾಕೊಲೇಟ್ ಗಳು ನಮ್ಮೆಲ್ಲರ ಮನಸ್ಸುಗಳಲ್ಲಿ ವಿಭಿನ್ನ ಚಿತ್ರಗಳನ್ನು ಮೂಡಿಸುತ್ತವೆ.

ಬೋಧಿಸುವುದೆಂದರೆ ಸುಮ್ಮನೆ ಮಾತನಾಡಿಬಿಡುವುದಲ್ಲ. ಕಥೆ ಹೇಳುವುದೆಂದರೆ ಒಂದು ಸಂಗತಿಯನ್ನು ತೋರಿಸುವುದು; ಹೇಗೆ ತೋರಿಸುವುದು, ಏಕೆ ತೋರಿಸುವುದು ಎಂಬ ಪ್ರಶ್ನೆಗಳ ಕುರಿತಾದದ್ದು;; ಏರಿಳಿತಗಳಿಂದ ಪದಗಳನ್ನು ಅಲಂಕರಿಸುವುದು; ಆ ಮೂಲಕ ಮಗುವಿನ ಮನಸಿನಲ್ಲಿ ಕಾಲ್ಪನಿಕ ಜಗತ್ತನ್ನು ಮತ್ತು ಒಂದು ಚಿಂತನೆಯನ್ನು ಹುಟ್ಟು ಹಾಕುವುದು.

ಒಮ್ಮೆ ಇದನ್ನು ಸಾಧಿಸಿದ ಮೇಲೆ ಮಗು ಸಂಪೂರ್ಣ ಜೀವನವಿಡೀ ಸುಲಭವಾಗಿ ಮಾತನಾಡಬಲ್ಲದು, ಓದಬಲ್ಲದು ಮತ್ತು ಸ್ಪಷ್ಟವಾಗಿ, ಆತ್ಮವಿಶ್ವಾಸದಿಂದ, ಆರಾಮವಾಗಿ ತನ್ನನ್ನು ತಾನು ವ್ಯಕ್ತಪಡಿಸಿಕೊಳ್ಳಬಲ್ಲದು

"ನಾಲಿಗೆಯ ತುದಿಯಲ್ಲಿರುವ ಕಥೆಗಳು" ಮಗುವಿನ ಮೇಲೆ ಆಳವಾದ ಪ್ರಭಾವ ಬೀರಬಲ್ಲದು; ಮಗುವಿಗೆ ತನ್ನ ಸುತ್ತಲಿನ ಸಂದರ್ಭಗಳು ಮತ್ತು ವಿಷಯಗಳಿಗೆ ಪ್ರತಿಕ್ರಿಯಿಸುವ ಸಾಮರ್ಥ್ಯ ನೀಡಬಲ್ಲದು.

**ನಾವು ಹೇಗೆ ಪ್ರಾರಂಭಿಸುವುದು?**

ಒಬ್ಬ ಒಳ್ಳೆಯ ಕಥೆಗಾರನಾಗಲು ಬಯಸುವವನು ಒಬ್ಬ ಒಳ್ಳೆಯ 'ಕಥೆ ಕೇಳುಗ'ನಾಗಿರಬೇಕಾಗುತ್ತದೆ. ಕಥೆಯನ್ನು ಹೇಳುವ ಜನರನ್ನು ಆಲಿಸಿ. ಅವರ ಭಾಷೆ, ಸ್ವರ ಮತ್ತು ಸ್ವರಗಳ ಮೇಲಿನ ಒತ್ತಡ, ವಾಕ್ಯ ರಚನೆ, ವಿರಾಮ ಮತ್ತು ಹರಿವನ್ನು ಗಮನಿಸಿ. ನಿಮ್ಮ ಸುತ್ತಲಿನ ಜನರ ಚಿತ್ರಗಳು, ಮಾತು ಮತ್ತು ನಡವಳಿಕೆಯ ವಿಶೇಷಗಳನ್ನು ಅವಲೋಕಿಸಿ.

ಉತ್ತಮ ಕಥೆಗಾರರಾಗಲು ಇರುವ ಉತ್ತಮ ಮಾರ್ಗವೆಂದರೆ ಕಥೆಗಳನ್ನು ಹೇಳುತ್ತಲೇ ಇರುವುದು. ಒಮ್ಮೆ ನೀವು ಆತ್ಮವಿಶ್ವಾಸ ಮತ್ತು ಆಸಕ್ತಿಯನ್ನು ಗಳಿಸಿಬಿಟ್ಟರೆ, ಹೆಚ್ಚಿನ ಕಥೆಗಳನ್ನು ಸಂಗ್ರಹಿಸಲು ಪ್ರಾರಂಭಿಸುತ್ತೀರಿ, ಕೆಲವನ್ನು ರೆಕಾರ್ಡ್ ಮಾಡಿಕೊಳ್ಳುತ್ತೀರಿ ಮತ್ತು ಅವುಗಳನ್ನು ಸುಲಭವಾಗಿ ನೆನಪಿಸಿಕೊಳ್ಳುತ್ತೀರಿ.

ನಿಮ್ಮ ಸ್ವಂತ ಕಥೆಗಳನ್ನು ಕೇಳಲು ಸಮಯ ತೆಗೆದುಕೊಳ್ಳಿ. ನೀವು ಯಾವ ಪಾತ್ರವನ್ನು ಚಿತ್ರಿಸುತ್ತಿರುವಿರೋ ಆ ಪಾತ್ರ ನೀವೇ ಆಗಿಬಿಡಿ. ಅದನ್ನು ಉತ್ಪ್ರೇಕ್ಷಿಸಲು ಪ್ರಯತ್ನಿಸಿ. ನೀವಲ್ಲದ ಪಾತ್ರವನ್ನು ರಚಿಸಿ. ಕಥೆಯಲ್ಲಿನ ಪಾತ್ರದೊಂದಿಗೆ ನಿಮ್ಮನ್ನು ಗುರುತಿಸಿಕೊಳ್ಳಲು ಪ್ರಯತ್ನಿಸಿ. ಕಥೆ ಹೇಳುವಿಕೆಯನ್ನು ಗಣಿತ, ವಿಜ್ಞಾನ, ಭಗೋಳಿಕ ಅಥವಾ ಇತಿಹಾಸದಂತೆನೋಡದಿದ್ದಾಗ ಇದೆಲ್ಲವೂ ಸಾಧ್ಯ. ಇದು ಕಂಠಪಾಠ ಮಾಡಿ ಕಲಿಯಬೇಕಾದ ವಿಷಯವಲ್ಲ. ಅದು ತನ್ನ ರಹಸ್ಯಗಳನ್ನು ಅಷ್ಟು ಸುಲಭವಾಗಿ ನಿಮಗೆ ಬಹಿರಂಗಪಡಿಸುವುದಿಲ್ಲ. ಅದಕ್ಕಾಗಿ ನೀವು "ಕಾಯಬೇಕಾಗುತ್ತದೆ, ನಿರೀಕ್ಷಿಸಬೇಕಾಗುತ್ತದೆ ಮತ್ತು ಸತತವಾಗಿ ಅವಲೋಕಿಸಬೇಕಾಗುತ್ತದೆ" ಈ ಪ್ರಕ್ರಿಯೆಯು ನಿಮ್ಮ ಆಲೋಚನಾ ಕೌಶಲ್ಯದಲ್ಲಿನ ಬದಲಾವಣೆಯ ಮೇಲೆ ಸ್ವಯಂಚಾಲಿತವಾಗಿ ಪರಿಣಾಮ ಬೀರುತ್ತದೆ. ಕಥೆ ಹೇಳುವ ನಿಮ್ಮ ಸ್ನೇಹಿತರು ಮತ್ತು ಮಕ್ಕಳ ಬಗ್ಗೆ ಗಮನವಿರಲಿ. ಅವರು ಕಥೆ ಹೇಳುವಾಗ ನಿಮ್ಮ ತಲೆಯನ್ನು ಅಲ್ಲಾಡಿಸುವ ಮೂಲಕ ಅಥವಾ ಹೂಂ..., ಹೌದಾ? ಎಂದು ಪ್ರತಿಕ್ರಿಯಿಸುವ ಮೂಲಕ, ಮನಸಾರೆ ಅವರು ಹೇಳುವುದನ್ನು ಆಲಿಸುತ್ತಿರುವಿರಿ ಎಂದು ಅವರಿಗೆ ಭರವಸೆ ನೀಡಿ. ಒಬ್ಬ ಉತ್ತಮ ಕಥೆ ಕೇಳುಗರಾದಾಗ ಮಾತ್ರ ನೀವು ಬಹುಶಃ ಉತ್ತಮ ಕಥೆಗಾರರಾಗುವ ಮಾರ್ಗದಲ್ಲಿ ಕ್ರಮಿಸಲಾರಂಭಿಸುವಿರಿ.

## ತರಗತಿಯಲ್ಲಿ ಕಥೆ ಹೇಳುವ ಉದ್ದೇಶವೇನು?

ಕಥೆ ಹೇಳುವಿಕೆಯು ತರಗತಿಗಳಿಗೆ ಜೀವ ತುಂಬುತ್ತದೆ ಮತ್ತು ಪರಿಕಲ್ಪನೆಗಳನ್ನು ಅರ್ಥಮಾಡಿಕೊಳ್ಳುವುದನ್ನು ಹೆಚ್ಚು ಸುಲಭವಾಗಿಸುತ್ತದೆ. ಸಾಮಾನ್ಯವಾಗಿ ಐದು ತರಗತಿಗಳನ್ನು ತೆಗೆದುಕೊಂಡಾಗ ಅರ್ಥವಾಗುವ ವಿಷಯವನ್ನು, ಕಥೆಯ ಮೂಲಕ ವಿವರಿಸಿದಾಗ ಒಂದು ಅಥವಾ ಎರಡು ತರಗತಿಗಳಲ್ಲಿ ಅರ್ಥಮಾಡಿಕೊಳ್ಳಬಹುದು. ಎಲ್ಲಕ್ಕಿಂತ

ಮುಖ್ಯವಾಗಿ, ಮಕ್ಕಳು ನಿಮ್ಮ ಮಾತುಗಳನ್ನು ಕೇಳುತ್ತಲೇ ನಿಮ್ಮ ಪದಗಳು, ಭಾಷೆ, ಉಚ್ಚಾರಣೆ, ಮತ್ತು ಧ್ವನಿಗಳನ್ನು ಕಲಿಯುತ್ತಿರುತ್ತಾರೆ.

ಪಿರಮಿಡ್ ಗಳ ಮಾಪನದ ಕುರಿತಾದ ಕಥೆಯನ್ನು ಮಕ್ಕಳು ಮನಃಪೂರ್ವಕವಾಗಿ ಕೇಳಿದಾಗ, ಅಥವಾ ಇತಿಹಾಸದ ಒಂದು ವೃತ್ತಾಂತವನ್ನು ಕಥೆಯ ಮೂಲಕ ಅನುಭವಿಸಿದಾಗ, ಅವರು ಸಂಪೂರ್ಣ ಎಚ್ಚರದಿಂದ ಪಾಠ ಕೇಳುತ್ತಿರುತ್ತಾರೆ.

ನೀವು ಮಾತನಾಡುವ ಪ್ರತಿಯೊಂದು ಪದ ಮತ್ತು ಶಬ್ದವು ಮಗುವಿನ ಮೇಲೆ ಪ್ರಭಾವ ಬೀರುತ್ತದೆ. ಕಥೆ ಹೇಳುವಿಕೆಯು ಬೇರೆಲ್ಲಾ ಕಲಿಕೆಗಳಿಗೆ ಅಡಿಪಾಯ ಹಾಕುತ್ತದೆ.

**ಕಥೆ ಹೇಳಲು ಅಗತ್ಯವಿರುವ ಸಾಧನಗಳು ಯಾವುವು?**

ಉತ್ತಮ ಸಾಧನವೆಂದರೆ, ಅದು ನಾವೇ. ನಮ್ಮದೇ ಆದ ಆಂತರಿಕ ನಂಬಿಕೆ ಮತ್ತು ಶಕ್ತಿಯು ಕಥೆ ಹೇಳುವ ವಾತಾವರಣವನ್ನು ಸೃಷ್ಟಿಸುತ್ತದೆ. ಮಕ್ಕಳಲ್ಲಿ ಕಥೆಗಳ ಬಗ್ಗೆ ನಂಬಿಕೆ ಮೂಡಿಸಬೇಕೆಂದರೆ, ಆ ನಂಬಿಕೆಯನ್ನು ಮೊದಲು ನಾವೇ ಹೊಂದಬೇಕಾಗುತ್ತದೆ.

ಒಮ್ಮೆ ಇಬ್ಬರು ವ್ಯಕ್ತಿಗಳು ಗೋಸುಂಬೆಯ ವಿಷಯದಲ್ಲಿ ಜಗಳವಾಡಿದರು. ಒಬ್ಬನು ಅದು ನೀಲಿ ಬಣ್ಣದ್ದೆಂದು ವಾದಿಸಿದರೆ, ಮತ್ತೊಬ್ಬನು ಅದು ಕಂದು ಬಣ್ಣದ್ದೆಂದು ವಾದಿಸಿದನು. ಕೊನೆಗೆ ಅವರಿಬ್ಬರೂ ಆ ಕಾಡಿನ ಭಾಗದಲ್ಲಿ ಹಲವು ವರ್ಷಗಳಿಂದ ವಾಸಿಸುತ್ತಿದ್ದ ಅವರ ಸ್ನೇಹಿತನ ಬಳಿಗೆ ಹೋದರು.

"ನೀವಿಬ್ಬರೂ ತಪ್ಪಾಗಿ ಹೇಳುತ್ತಿದ್ದೀರಿ. ಗೋಸುಂಬೆಯು ಕಪ್ಪು ಬಣ್ಣದ್ದಾಗಿದ್ದು ಅದು ನನ್ನ ಪೆಟ್ಟಿಗೆಯಲ್ಲಿ ಇದೆ" ಎಂದು ಸ್ನೇಹಿತ ಹೇಳುತ್ತಾನೆ. ಅವನು ಪೆಟ್ಟಿಗೆಯನ್ನು ತೆರೆದಾಗ ಗೋಸುಂಬೆಯು ಬಿಳಿಯ ಬಣ್ಣದ್ದಾಗಿತ್ತು. ಹಾಗಾಗಿ, ಅಲ್ಲಿ ಯಾರೊಬ್ಬರೂ ಸರಿಯೂ ಅಲ್ಲ ಮತ್ತು ಯಾರೊಬ್ಬರೂ ತಪ್ಪೂ ಅಲ್ಲ. ಹಾಗೆಯೇ ಕಥೆ ಹೇಳುವಿಕೆಯಲ್ಲಿಯೂ ಕೆಲವು ಕಥೆಗಳು ಸತ್ಯವಾಗಿರಬಹುದು ಮತ್ತು ಕೆಲವು ಸುಳ್ಳಾಗಿರಬಹುದು. ಆದರೆ ಅವೆಲ್ಲವೂ ಕಥೆಗಳೇ.

'ಬ್ರಹ್ಮಾಂಡವು ಕಥೆಗಳಿಂದ ಮಾಡಲ್ಪಟ್ಟಿದೆ, ಪರಮಾಣುಗಳಿಂದಲ್ಲ' ಎಂಬ ಮಾತನ್ನು ಮಹಾನ್ ತತ್ವಜ್ಞಾನಿಯೊಬ್ಬರು ಹೇಳಿದ್ದಾರೆ.

ಆದ್ದರಿಂದ, ಒಮ್ಮೆ ಆ ಮಾತಿನ ಮೇಲೆ ನಮಗೆ ನಂಬಿಕೆ ಬಂದರೆ, ನಾವು ರುಚಿಕರವಾದ ಖಾದ್ಯವನ್ನು ತಯಾರಿಸಲು ಅಡುಗೆಗೆ ಬೇಕಾದ ಪದಾರ್ಥಗಳನ್ನು ಸೇರಿಸುತ್ತಾ ಹೋಗುವಂತೆ ನಮ್ಮಕಥೆಗೂ ನಮ್ಮ ಭಾವನೆಗಳನ್ನು ಸೇರಿಸುತ್ತಾ ಹೋಗುತ್ತೇವೆ.

ಕಥೆ ಹೇಳುವ ನಮ್ಮ ಮೂಲ ಸಾಧನಗಳೆಂದರೆ:

- ದೇಹ ಭಾಷೆ
- ಅಭಿವ್ಯಕ್ತಿಗಳು
- ಧ್ವನಿ
- ವಿಶೇಷ ನಡವಳಿಕೆ(mannerisms)
- ಪದಗಳ ಆಟ
- ಭಾಷೆಯಲ್ಲಿನ ನಿರರ್ಗಳತೆ
- ಶಬ್ದಕೋಶ
- ಸಾಮಾನ್ಯ ಜ್ಞಾನ
- ಮನಸ್ಸಿನ ತತ್‌ಕ್ಷಣದ ಏಕಾಗ್ರತೆ

ನಾವು ಒಳ್ಳೆಯ ಕಥೆಗಾರರಾಗಬೇಕೆಂದರೆ ಹೇಳುವ ಆ ಕಥೆಯನ್ನು ಮತ್ತೆ ಮತ್ತೆ ಓದಿಕೊಳ್ಳಬೇಕಾಗುತ್ತದೆ.

"ಒಂದಾನೊಂದು ಕಾಲದಲ್ಲಿ ಒಂದು ಕಾಗೆ ಇತ್ತು" ಎಂಬುದನ್ನು ಹೇಳುವುದಕ್ಕಿಂತ ಸುಲಭವಾಗಿ ಓದಬಹುದು. ಏಕೆಂದರೆ ನೀವು ಕಥೆಯನ್ನು ಹೇಳಲು ಪ್ರಾರಂಭಿಸಿದಾಗ, ಅದನ್ನು ಸರಿಯಾದ ಸ್ವರ ಮತ್ತು ಶಬ್ದಗಳನ್ನು ಬಳಸಿ ಸರಳವಾಗಿ ಮತ್ತು ಸ್ಪಷ್ಟವಾಗಿ ಹೇಳಬೇಕು.

ಇದರಲ್ಲಿ ಪ್ರಾವೀಣ್ಯಗಳಿಸಲು ಈ ಕೆಳಗಿನ ಅಂಶಗಳ ಅಗತ್ಯವಿದೆ:

- ಕೇಳುಗರಿಗೆ ಸರಿಹೊಂದುವ ಕಥೆಯನ್ನು ಆರಿಸಿ. ನಿಮಗೆ ಅತ್ಯಂತ ಪರಿಚಿತವಾದ ಕಥೆಗಳೇ ಉತ್ತಮ ಕಥೆಗಳಾಗಿವೆ. ಅಂತಹ ಕಥೆಗಳನ್ನು ತರಗತಿಯಲ್ಲಿ ಹೇಳುವ ಮುನ್ನ ನಿಮ್ಮ ಕುಟುಂಬ ಮತ್ತು ಸಹೋದ್ಯೋಗಿಗಳ ಮುಂದೆ ಅವನ್ನು ಹೇಳುವ ಪ್ರಯತ್ನ ಮಾಡಿರಬೇಕು.
- ಕಥೆಯನ್ನು ಪರಿಣಾಮಕಾರಿಯಾಗಿ ನಿರೂಪಿಸಲು ಕಲಿಯಿರಿ.
- ಹಲವಾರು ಬಾರಿ ಅಭ್ಯಾಸ ಮಾಡಿ.
- ಆರಂಭ ಮತ್ತು ಅಂತ್ಯ ಚೆನ್ನಾಗಿರುವಂತೆ ನೋಡಿಕೊಳ್ಳಿ.
- ಕಥಾನಿರೂಪಣೆ ಪಾತ್ರಗಳನ್ನು ಸ್ಪಷ್ಟವಾಗಿ ಚಿತ್ರಿಸಿದೆ ಎಂಬುದನ್ನು ಖಚಿತಪಡಿಸಿಕೊಳ್ಳಿ.
- ನಿಮ್ಮ ಕಥೆಗೆ ಸಮಯವನ್ನು ನಿಗದಿಪಡಿಸಿ.
- ಕಥೆಯನ್ನು ಓದಿ.
- ಅದನ್ನು ಹಲವಾರು ಬಾರಿ ಗಟ್ಟಿಯಾಗಿ ಓದಿ.

- ಕಥೆಯನ್ನು ಹೇಳಿ.
- ಕಥೆಯನ್ನು ಗಟ್ಟಿಯಾಗಿ ಪುನಃ ಹೇಳಿ.
- ಅಭಿವ್ಯಕ್ತಿ, ಕ್ರಿಯೆ, ಶಬ್ದಗಳನ್ನು ಸೃಷ್ಟಿಸಿ, ಅಭ್ಯಾಸ ಮಾಡಿ.
- ಕಥೆಯನ್ನು ವೈಯಕ್ತೀಕರಿಸಿ.
- ಅದಕ್ಕೆ ಅಂತಿಮ ಮೆರುಗನ್ನು ನೀಡಿ.

ನೀವು ಈಗ ನಿಮ್ಮ ಕಥೆಯನ್ನು ಹೇಳಲು ಸಿದ್ಧರಾಗಿರುವಿರಿ.

"ಬ್ರಹ್ಮಾಂಡವು ಕಥೆಗಳಿಂದ ಮಾಡಲ್ಪಟ್ಟಿದೆ, ಪರಮಾಣುಗಳಿಂದಲ್ಲ..."

ಗೀತಾ ರಾಮಾನುಜನ್ ಅವರು ಕಥೆಗಾರ್ತಿ, ಶಿಕ್ಷಣತಜ್ಞೆ ಮತ್ತು ಭಾರತದ ಮತ್ತು ಪ್ರಪಂಚದಾದ್ಯಂತದ ಹಲವಾರು ಶೈಕ್ಷಣಿಕ ಕಾರ್ಯಕ್ರಮಗಳಿಗೆ ಸಲಹೆಗಾರರಾಗಿದ್ದಾರೆ. ಅವರು ಅಶೋಕ ಫೆಲೋಶಿಪ್ ಪಡೆದಿದ್ದಾರೆ. ಅವರು ಇಲ್ಲಿಯವರೆಗೆ 49,000 ಶಿಕ್ಷಕರಿಗೆ ತರಬೇತಿ ನೀಡಿದ್ದಾರೆ ಮತ್ತು ಕಥೆ ಹೇಳುವಿಕೆಯನ್ನು ಶಿಕ್ಷಣದೊಂದಿಗೆ ಸಂಯೋಜಿಸುವಲ್ಲಿ ಯಶಸ್ವಿಯಾಗಿದ್ದಾರೆ ಮತ್ತು ಕಲಾ ಪ್ರಕಾರವಾಗಿ ಕಥೆ ಹೇಳುವ ಹೊಸ ಆಯಾಮವನ್ನು ನೀಡಿದ್ದಾರೆ. ಅವರು ಭಾರತದಲ್ಲಿ ಮೊದಲ ಬಾರಿಗೆ ಕಥೆ ಹೇಳುವಿಕೆಗೆ ಸರ್ಟಿಫಿಕೇಟ್ ಕೋರ್ಸ್‌ಗಳನ್ನು ನೀಡುವ ಅಕಾಡೆಮಿಯನ್ನು ಅಭಿವೃದ್ಧಿಪಡಿಸುವಲ್ಲಿ ಪ್ರಮುಖ ಪಾತ್ರ ವಹಿಸಿದ್ದಾರೆ. ಗೀತಾ ಅವರಿಗೆ ಕಥೆ ಹೇಳುವುದು ಒಂದು ಆಧ್ಯಾತ್ಮಿಕ ಮತ್ತು ಧಾರ್ಮಿಕ ಪ್ರಯಾಣವಾಗಿದೆ ಮತ್ತು ಕಥೆ ಹೇಳುವ ಕಾರ್ಯಾಗಾರದಿಂದ, ಆ ಕಾರ್ಯಾಗಾರದಲ್ಲಿ ಭಾಗವಹಿಸಿದವರ ಭಾವನೆಗಳಲ್ಲಿ ಒಂದಲ್ಲ ಒಂದು ರೀತಿಯಲ್ಲಿ ಪರಿಣಾಮ ಉಂಟಾಗಿದೆ ಎಂಬ ಸಾರ್ಥಕ ಸಂತೃಪ್ತಭಾವವನ್ನು ಅನುಭವಿಸುತ್ತಾರೆ. ಅವರನ್ನು ಇಲ್ಲಿ ಸಂಪರ್ಕಿಸಬಹುದು: geetastory@gmail.com.